WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೮, ೨೦೧೧ (ಭಾದ್ರಪದ ೧೭, ಶಕ ವರ್ಷ ೧೯೩೩) | ಸಂಚಿಕೆ ೩೬ |
|---|---|---|

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕಂದಾಯ ಇಲಾಖೆ**

**ಜಿಲ್ಲಾಧಿಕಾರಿಗಳ ಕಛೇರಿ ಬಳ್ಳಾರಿ.**

**ಅಧಿಸೂಚನೆ**

**ಸಂ/ಕಂ/ಸಿಬ್ಬಂದಿ–3/02/2011–12, ದಿನಾಂಕ 28–04–2011**

ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯ ಬಳ್ಳಾರಿ ಜಿಲ್ಲೆಯಲ್ಲಿ ಬರುವ ತಾಲೂಕುಗಳಲ್ಲಿ 2009ನೇ ಸಾಲಿನ ನೇಮಕಾತಿ ಪ್ರಕ್ರಿಯೇಯಲ್ಲಿ ನೇಮಕಾತಿ ಆದೇಶ ನೀಡಿರುವ 69 ಅಭ್ಯರ್ಥಿಗಳಲ್ಲಿ ಕೆಲವು ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗದೇ ಖಾಲಿ ಉಳಿದಿವೆ. ಅನಂತರ ವಯೋನಿವೃತ್ತಿ, ರಾಜೀನಾಮೆ, ಮುಂಬಡ್ತಿ ವರ್ಗಾವಣೆ ಇನ್ನಿತರೆ ಕಾರಣಗಳಿಂದ ತೆರವಾಗಿವೆ. ಆದ್ದರಿಂದ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಕರ್ನಾಟಕ ಸಾಮಾನ್ಯ ಸೇವೆಗಳು (ರೆವೆನ್ಯೂ ಸಬೊರ್ಡಿನೇಟ್ ಬ್ರಾಂಚ್ ) (ಕೇಡರ್ ಎಂಡ್ ರಿಕ್ರ್ಯೂಟ್ ಮೆಂಟ್) (ತಿದ್ದುಪಡಿ ನಿಯಮಗಳು 2008 ಮತ್ತು 2009 ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಸರ್ಕಾರದ ಪತ್ರ ಸಂಖ್ಯೆ/ಕಂ/ಇ/04/ಬಿ.ಎಸ್.ಸಿ/2011 ದಿನಾಂಕ 25–02–2011 ರಲ್ಲಿ ಅನುಮೋದನೆ ನೀಡಿದೆ. ಅದರಂತೆ ಗ್ರಾಮ ಲೆಕ್ಕಿಗರ ಖಾಲಿ ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ನಿಗದಿಪಡಿಸಿದ ನಮೂನೆಯಲ್ಲಿ ಅರ್ಜಿಗಳನ್ನು on Line ಮೂಲಕ ಆಹ್ವಾನಿಸಲಾಗಿದೆ.

ಗ್ರಾಮ ಲೆಕ್ಕಿಗರ ಖಾಲಿ ಇರುವ ಹುದ್ದೆಗಳ ವಿವರಗಳು ಈ ಕೆಳಗಿನಂತಿವೆ.

**ಹುದ್ದೆಗಳ ವರ್ಗೀಕರಣ**

2010–11 ನೇ ಸಾಲಿನ ಖಾಲಿ ಹುದ್ದೆಗಳು ( ರೋಸ್ಟರ್ ಬಿಂದು 70 ರಿಂದ 87 ರ ವರೆಗೆ )

| ವರ್ಗ | ಹುದ್ದೆಗಳು | ಮ.ಅ | ಮಾ.ಸೈ | ಅಂ.ವಿ | ಯೋ.ನಿ | ಗ್ರಾ.ಅ | ಕ.ಮಾ.ಅ | ಸಾಮಾನ್ಯ | ಒಟ್ಟು |
|---|---|---|---|---|---|---|---|---|---|
| ಸಾ.ಅ | 8 | 3 | 1 | – | 1 | 2 | – | 1 | 8 |
| ಪ.ಜಾತಿ | 2 | 1 | – | – | – | 1 | – | – | 2 |
| ಪ.ಪಂ | 1 | – | – | – | – | 1 | – | – | 1 |
| ಪ. I | 1 | – | – | 1 | – | – | – | – | 1 |
| IIಎ | 2 | 1 | – | – | – | 1 | – | – | 2 |
| IIಬಿ | 1 | – | – | 1 | – | – | – | – | 1 |
| IIIಎ | 1 | – | – | – | – | 1 | – | – | 1 |
| IIIಬಿ | 1 | – | – | 1 | – | – | – | – | 1 |
| ಒಟ್ಟು | 17 | 5 | 1 | 3 | 1 | 6 | – | 1 | 17 |

**ಸೂಚನೆ:** ಒಟ್ಟು 18 ಗ್ರಾಮ ಲೆಕ್ಕಿಗರ ಹುದ್ದೆಗಳು ಖಾಲಿ ಇದ್ದು ಅಂಗವಿಕಲ ಅಭ್ಯರ್ಥಿ ಬಗ್ಗೆ ಸೂಕ್ತ ತೀರ್ಮಾನ ತೆಗೆದುಕೊಳ್ಳಲು ಸರ್ಕಾರ ಮಟ್ಟದಲ್ಲಿ ಸ್ಪಷ್ಟೀಕರಣಕ್ಕಾಗಿ ಬಾಕಿ ಇರುವುದರಿಂದ ಒಂದು ಹುದ್ದೆಯನ್ನು ಹೊರತು ಪಡಿಸಿ 17 ಹುದ್ದೆಗಳಿಗೆ ಸಂಬಂಧಿಸಿದಂತೆ ಮೇಲಿನಂತೆ ವರ್ಗೀಕರಿಸಲಾಗಿದೆ.

1.**ಅರ್ಜಿ ಸಲ್ಲಿಸುವ ವಿಧಾನ:** ಅರ್ಜಿಗಳನ್ನು ಅನ್ ಲೈನ್ ( On line) ( ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದಾಗಿದೆ. **ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

2. **ಅರ್ಜಿ ಶುಲ್ಕ:**

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಪ್ರವರ್ಗ–1 ಹಾಗೂ ಮಹಿಳಾ ಅಭ್ಯರ್ಥಿಗಳು | ರೂ 100.00 |
| ಸಾಮಾನ್ಯ ವರ್ಗ 2ಎ, 2ಬಿ, 3 ಎ,3 ಬಿ ವರ್ಗಕ್ಕೆ | ರೂ 200.00 |

3. **ಆನ್‌ಲೈನ್ (On Line)** ಮುಖಾಂತರ ಅರ್ಜಿ ಸಲ್ಲಿಸುವ ವಿಧಾನ: ಅಭ್ಯರ್ಥಿಯು ಇಲಾಖೆಯ ಅಧಿಕೃತ ವೆಬ್ ಸೈಟ್ http://bellary-va.kar.nic.in ತೆರೆದು ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅಭ್ಯರ್ಥಿಯು Submit Button ಅನ್ನು ಒತ್ತಿದರೆ ಅರ್ಜಿ ಸಂಖ್ಯೆ ( Reference Number) ಸೃಷ್ಟಿಯಾಗುತ್ತದೆ. ಆನ್ ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (Acknolwedgement Slip) ಮತ್ತು ದ್ವಿಪ್ರತಿ ಚಲನ್‌ನ್ನು ತೆಗೆದುಕೊಳ್ಳತಕ್ಕದ್ದು. ಈ ಚಲ್‌ನ್ ನ್ನು ಅರ್ಜಿ ಶುಲ್ಕದೊಂದಿಗೆ ಸ್ಟೇಟ್ ಬ್ಯಾಂಕ್ ಅಫ್ ಮೈಸೂರು ಬ್ಯಾಂಕ್‌ನ ಯಾವುದಾದರೂ ಶಾಖೆಯ ಜಿಲ್ಲಾಧಿಕಾರಿಗಳು ಬಳ್ಳಾರಿ ಖಾತೆ ಎಸ್.ಬಿ.ನಂ. **64043310450** ಕ್ಕೆ ಪಾವತಿಸಬೇಕು. ಅಭ್ಯರ್ಥಿಗಳು ಸ್ವೀಕೃತಿ ಸ್ಲಿಪ್‌ನ್ನು ಮತ್ತು ಚಲಾನ್ ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಇನ್ನೊಂದು ಚಲನ್ ಪ್ರತಿ ಬ್ಯಾಂಕ್ ಬಳಿ ಇರುತ್ತದೆ. ಈ ದಾಖಲೆಗಳನ್ನು ಪರಿಶೀಲನೆಗೆ ನಿಗಧಿಪಡಿಸಿದ ದಿನಾಂಕ 28.07.2011 ರಂದು ಹಾಜರುಪಡಿಸತಕ್ಕದ್ದು ಬ್ಯಾಂಕಿನಲ್ಲಿ ನಿಗಧಿತ ಅರ್ಜಿ ಶುಲ್ಕ ಪಾವತಿಸಲು **ಕೊನೆಯ ದಿನಾಂಕ 07.06.2011** ಆಗಿರುತ್ತದೆ. **ಪಾವತಿಸಿದ ಚಲನ್ ಮಾತ್ರ ಸ್ಕ್ಯಾನ್ ಮಾಡಲು ದಿನಾಂಕ 10–06–2011 ರಂದು ಕೊನೆಯ ದಿನಾಂಕವಾಗಿರುತ್ತದೆ.** ನಿಗಧಿತ ಅರ್ಜಿಶುಲ್ಕ ಹೊರತುಪಡಿಸಿ ಯಾವುದೇ ವಿಧವಾದ ಬ್ಯಾಂಕ್ ಶುಲ್ಕ ಇತ್ಯಾದಿ ಪಾವತಿಸುವ ಅವಶ್ಯಕತೆ ಇರುವುದಿಲ್ಲ. ಡಿ.ಡಿ. ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಅಲ್ಲದೇ ಒಮ್ಮೆ ಅರ್ಜಿ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ಇತರ ಯಾವುದೇ ನೇಮಕಾತಿಗೆ ಹೊಂದಿಸಿಕೊಳ್ಳಾಗುವುದಿಲ್ಲ. ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದ ವರೆಗೂ ವಿಳಂಬ ಮಾಡದೇ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

1) ಅರ್ಜಿಗಳನ್ನು ದಿನಾಂಕ 02.05.2011 ರಿಂದ 07.06.2011 ಒಳಗಾಗಿ ಸಲ್ಲಿಸತಕ್ಕದ್ದು.

2) ಅರ್ಜಿ ಶುಲ್ಕವನ್ನು ದಿನಾಂಕ 02–05–11 ರಿಂದ 07–06–11 ರ ವರೆಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿ ಬ್ಯಾಂಕ್ ವ್ಯವಹಾರದ ವೇಳೆಯಲ್ಲಿ ಪಾವತಿಸತಕ್ಕದ್ದು. **ಪಾವತಿಸಿದ ಚಲನ್ ಮಾತ್ರ ಸ್ಕ್ಯಾನ್ ಮಾಡಲು ದಿನಾಂಕ 10–06–2011 ರಂದು ಕೊನೆಯ ದಿನಾಂಕವಾಗಿರುತ್ತದೆ**

4. **ಅರ್ಹತಾ ಷರತ್ತುಗಳು:**

ಅ. ಭಾರತೀಯ ನಾಗರೀಕನಾಗಿರತಕ್ಕದ್ದು

ಆ) ಅಭ್ಯರ್ಥಿಗಳು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಅತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ/ಮಾನಸಿಕ ನ್ಯೂನತೆಯಿಂದ ಮುಕ್ತರಾಗಿರತಕ್ಕದ್ದು.

5. **ಶೈಕ್ಷಣಿಕ ವಿದ್ಯಾರ್ಹತೆ:**

ಪಿ.ಯು.ಸಿ ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು.

6. **ವೇತನ ಶ್ರೇಣಿ:**

ರೂ 5800–100–6000–125–6500–150–7100–175–7800–200–8600–225–9500–250–10500

7. **ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗಧಿಪಡಿಸಿದ ಕೊನೆಯ ದಿನಾಂಕವಾದ 07.06.2011 ರಂದು ಈ ಕೆಳಗಿನಂತ ವಯೋಮಿತಿ ಹೊಂದಿರತಕ್ಕದ್ದು.

| | **ಕನಿಷ್ಠ** | **ಗರಿಷ್ಠ** |
|---|---|---|
| 1) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ | 18 | 40 |
| 2) ಪವರ್ಗ 1 | 18 | 40 |
| 3) 2ಎ, 2ಬಿ, 3ಎ, 3ಬಿ | 18 | 38 |
| 4) ಸಾಮಾನ್ಯ ವರ್ಗ | 18 | 35 |

8. **ಜಾತಿ ಮೀಸಲಾತಿ ಪ್ರಮಾಣ ಪತ್ರಗಳು:**

1. ಜಾತಿ ಮೀಸಲಾತಿ ಕೋರಬಯಸುವ:

1. ಪ.ಜಾ/ಪ.ಪಂ. ಅಭ್ಯರ್ಥಿಗಳು ನಮೂನೆ **ಡಿ** ರಲ್ಲಿ ( **ಅನುಬಂಧ1)**

2. ಪ್ರವರ್ಗ – 1 ರ ಅಭ್ಯರ್ಥಿಗಳು ನಮೂನೆ ಇ ನಲ್ಲಿ (**ಅನುಬಂಧ 2**)

2. 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ ಎಫ್ ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು (**ಅನುಬಂಧ 3**).

ಈ ಪ್ರಮಾಣ ಪತ್ರಗಳು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ:07.06.2011 ದೊಳಗೆ ಅರ್ಹತೆಯನ್ನು ಪಡೆದಿರಬೇಕು.

3. ಜಾತಿ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿ (ಅಧ್ಯಕ್ಷರು, ಜಾತಿ ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.

9) **ಗ್ರಾಮೀಣ ಅಭ್ಯರ್ಥಿ:**

1. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು.
2. ಗ್ರಾಮೀಣ ಮೀಸಲಾಯಿತಿಯನ್ನು ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ 1, 2ಎ, 2ಬಿ, 3ಎ, 3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳು ನಮೂನೆ 2 ರಲ್ಲಿ ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಪಡೆದಿಟ್ಟು ಕೊಂಡಿರತಕ್ಕದ್ದು.
3. ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 2 ರ ಬಗ್ಗೆ ಪ್ರಮಾಣ ಪತ್ರದ ಜೊತೆಗೆ ನಮೂನೆ 1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ತಹಶೀಲ್ದಾರರಿಂದ ಪಡೆದಿಟ್ಟು ಕೊಂಡಿರತಕ್ಕದ್ದು. (ಅನುಬಂದ– 4 ನಮೂನೆ 1 ಮತ್ತು 2)

**ಸೂಚನೆ:** ಗ್ರಾಮೀಣ ಮೀಸಲಾತಿಗೆ ಸಂಬಂಧಿಸಿದಂತೆ ನಮೂನೆ 2 ರಲ್ಲಿಯ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ತಾವು ವ್ಯಾಸಂಗ ಮಾಡಿದ ಶಾಲೆಯ ಮುಖ್ಯೋಪಾದ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಪಡೆದಿರತಕ್ಕದ್ದು. ಎಸ್.ಎಸ್.ಎಲ್.ಸಿ. ಅಥವಾ ವರ್ಗಾವಣೆ ಪ್ರಮಾಣ ಪತ್ರ ( ಟಿಸಿ) ಅಥವಾ ಕ್ಯುಮುಇಲೇಟಿವ್ ರೆಕಾರ್ಡ ನಲ್ಲಿ ನಮೂದಿಸಿರುವ ಜನ್ಮ ದಿನಾಂಕವನ್ನು ಆಯ್ಕೆ ಪ್ರಾಧಿಕಾರವು ಪರಿಗಣಿಸುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ. ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) 1977ರ ನಿಯಮಾವಳಿಗಳ ನಿಯಮ 6 ರಂತೆ ವಯೋಮಿತಿಯನ್ನು ಅದರಲ್ಲಿ ತಿಳಿಸಿರುವ ಮಟ್ಟಿಗೆ ಸಂಬಂಧಪಟ್ಟ ದಾಖಲೆ ಒದಗಿಸಿದಲ್ಲಿ ಹೆಚ್ಚಿಸುವ ಬಗ್ಗೆ ಪರಿಶೀಲಿಸಲಾಗುವುದು.

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 6 ರಂತೆ ಗರಿಷ್ಟ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಮುಂದೆ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿನ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡುವಷ್ಟು ಅಥವಾ ಧಾರಣೆ ಮಾಡಿದ್ದಷ್ಟು ಅಥವಾ (10 ) ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಮಾಜಿ ಸೈನಿಕನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಮೂರು ವರ್ಷಗಳು ಮತ್ತು ಇದಕ್ಕೆ **ಕೇಂದ್ರದ ಸಶಸ್ತ್ರ ಪಡೆಗಳಲ್ಲಿ ಅವನು ಸೇವೆ ಸಲ್ಲಿಸಿರುವಷ್ಟು ವರ್ಷಗಳನ್ನು ಸೇರಿಸಬೇಕು.**

ಸಿ) ಅಂಗವಿಕಲನಾಗಿರುವ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

ಡಿ) ಈ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದ್ದಷ್ಟು ವರ್ಷಗಳು ಅಥವಾ 5 ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು

ಇ) ವಿಧವೆ ಅಭ್ಯರ್ಥಿಗಳಿಗೆ 10 ವರ್ಷಗಳು.

**10. ಕನ್ನಡ ಮಾಧ್ಯಮ ಅಭ್ಯರ್ಥಿ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಪಡೆದಿರತಕ್ಕದ್ದು(ಅನುಬಂಧ–5)

**11) ಯೋಜನಾ ನಿರಾಶ್ರಿತ ಅಭ್ಯರ್ಥಿ:**

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ನಿಗದಿತ ನಮೂನೆಯಲ್ಲಿ ಪ್ರಮಾಣ ಪತ್ರವನ್ನು ಪಡೆದುಕೊಂಡಿರತಕ್ಕದ್ದು. (ಅನುಬಂಧ–6)

**12) ಅಂಗವಿಕಲರ ಮೀಸಲಾತಿ ಬಗ್ಗೆ:**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 9(1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇಕಡ 5 ರಷ್ಟು ಸಮತಳ ಮೀಸಲಾತಿ ಕಲ್ಪಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ:ಸಿಅಸುಇ 128 ಸೆನೆನಿ 2006 ದಿನಾಂಕ:01–08–2009 ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಸೂಚನೆ ಸಂ.DPAR 52 SSR 99 ದಿ:29–11–2002 ರೀತ್ಯಾ ಗ್ರಾಮ ಲೆಕ್ಕಿಗರ ಹುದ್ದೆಗಳಲ್ಲಿ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ.

1) ಕುಷ್ಠ ರೋಗದಿಂದ ಗುಣಮುಖರಾದವರು (leprosy cured) 2. ಶ್ರವಣ ದೋಷವುಳ್ಳವರು (Hearing impaired) 3. ಮಾನಸಿಕ ಅಸ್ವಸ್ಥತೆ (Mentally ill) **ಈ ಮೇಲಿನ ಅಂಗವಿಕಲರು ಹೊರತುಪಡಿಸಿ ಇತರೆ ದೈಹಿಕ ಅಂಗವಿಕಲತೆಯುಳ ಅಭ್ಯರ್ಥಿಗಳು ಗ್ರಾಮ ಲೆಕ್ಕಿಗರ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ**. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಅಸುಇ 128 ಸೆನೆನಿ 2005 ದಿನಾಂಕ:19–11–2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಪಡೆದು ಕೊಂಡಿರತಕ್ಕದ್ದು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಲಗತ್ತಿಸಿದೆ. (ಅನುಬಂಧ–8)

**ಸೂಚನೆ:–** ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕ: 07–06–2011 ರೊಳಗೆ ಅರ್ಹತೆಯನ್ನು ಪಡೆದಿರಬೇಕು. ಪ್ರಮಾಣ ಪತ್ರಗಳ ನಮೂನೆಗಳನ್ನು ಅನುಬಂಧ 1 ರಿಂದ 8 ರವರೆಗೆ ನೋಡಬಹುದು. ತಾತ್ಕಾಲಿಕ ಪರಿಶೀಲನಾ ಪಟ್ಟಿಯಲ್ಲಿ ಪ್ರಕಟಗೊಂಡ ಅಭ್ಯರ್ಥಿಗಳು ಮಾತ್ರ ನಿಗಧಿತ ದಿನಾಂಕ: 28–7–2011 ರಂದು ಪೂರ್ವಾಹ್ನ 10–00 ಗಂಟೆಗೆ ನೇಮಕಾತಿ ಪ್ರಾಧಿಕಾರದ ಎದುರು (ಬಳ್ಳಾರಿ ಜಿಲ್ಲಾಧಿಕಾರಿಯವರ ಕಛೇರಿಸಭಾಂಗಣ) ಮೂಲ ಪ್ರಮಾಣ ಪತ್ರಗಳನ್ನು ತಪ್ಪದೇ ಹಾಜರು ಪಡಿಸತಕ್ಕದ್ದು.

**13.ಆಯ್ಕೆ ವಿಧಾನ:**

ಕರ್ನಾಟಕ ಜನರಲ್ ಸರ್ವೀಸಸ್ (Revenue Subordinate Branch) (Cadre & Recruitment) (ತಿದ್ದುಪಡಿ) ನಿಯಮಗಳು 2008 ಮತ್ತು 2009 ಹಾಗೂ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳ (on merit) ಆಧಾರದ ಮೇಲೆ ಆಯಾಯ ಮೀಸಲಾತಿ ಪ್ರವರ್ಗಕ್ಕೆ ಸಂಬಂಧಿಸಿದಂತೆ ಆಯ್ಕೆ ಮಾಡಲಾಗುವುದು. ನಿಯಮಾವಳಿಯಂತೆ ತಾತ್ಕಾಲಿಕ ಪರಿಶೀಲನಾ ಪಟ್ಟಿಯನ್ನು ದಿನಾಂಕ: 07–07–2011 ರಂದು ಪ್ರಕಟಿಸಲಾಗುವುದು.

**14. ಪ್ರಮುಖ ಸೂಚನೆಗಳು:**

ಈ ಕೆಳಕಂಡ ಮೂಲ ಪ್ರಮಾಣ ಪತ್ರಗಳನ್ನು ನಿಗಧಿಪಡಿಸಿದ ದಿನಾಂಕ: 28–7–2011 ರಂದು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು.

- ಪಿ.ಯು.ಸಿ. ಪರೀಕ್ಷೆ ಅಥವಾ CBSE ಅಥವಾ ICSE ನಡೆಸುವ 12ನೇ ತರಗತಿ ಪರೀಕ್ಷೆಯ ಪ್ರಮಾಣ ಪತ್ರ
- ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ಕ್ಯುಮುಲೇಟಿವ್ ದಾಖಲೆ)
- ಸೇವೆಯಲ್ಲಿರುವ ಅಭ್ಯರ್ಥಿಗಳು ಅವರು ಸೇವೆಯಲ್ಲಿರುವ ಬಗ್ಗೆ ಸೇವಾ ಪ್ರಮಾಣ ಪತ್ರ ಮತ್ತು ಸದರಿ ಹುದ್ದೆಗೆ ಅರ್ಜಿ ಸಲ್ಲಿಸುವ ಬಗ್ಗೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (No Objection Certificate) ಸಂಬಂಧಿಸಿದ ನೇಮಕಾತಿ ಪ್ರಾಧಿಕಾರದಿಂದ ಪಡೆದಿಟ್ಟುಕೊಂಡಿರಬೇಕು. (ಅನುಬಂಧ–7)
- ಪರಿಶಿಷ್ಟ ಜಾತಿ– ಪರಿಶಿಷ್ಟ ಪಂಗಡ (**ಅನುಬಂಧ–1, ನಮೂನೆ–ಡಿ**) ಮತ್ತು ಪ್ರವರ್ಗ–1 (**ಅನುಬಂಧ–2, ನಮೂನೆ–ಇ**) ಹಾಗೂ 2ಎ, 2ಬಿ, 3ಎ, 3ಬಿ (**ಅನುಬಂಧ–3, ನಮೂನೆ–ಎಫ್**) ಮೀಸಲಾತಿ ಅಭ್ಯರ್ಥಿಗಳು ಕ್ರಮವಾಗಿ ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್ ರವರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.
- ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ವಿಧವೆಯರು, ಇವರುಗಳು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ
- ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ

**15. ಸಾಮಾನ್ಯ ಸೂಚನೆಗಳು:**

1) ನೈತಿಕ ದುರ್ನಡತೆಯಿಂದಾಗಿ/ ನೀತಿ ಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ/ಕೇಂದ್ರ/ ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿ ಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ/ ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ/ ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗಿರುತ್ತಾರೆ.

2) ಅರ್ಜಿಯಲ್ಲಿ ತಪ್ಪು/ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ ಹಾಗೂ ಕ್ರಿಮಿನಲ್ ಮೊಕದ್ದಮೆ ದಾಖಲಿಸಲಾಗುವುದು.

3) ಅರ್ಜಿಯಲ್ಲಿ ನೀಡುವ ವಿಳಾಸವೇ ಅಂತಿಮವಾಗಿದ್ದು, ಎಲ್ಲಾ ಪತ್ರ ವ್ಯವಹಾರಗಳನ್ನು ಅದೇ ವಿಳಾಸಕ್ಕೆ ಕಳುಹಿಸಿ ಕೊಡಲಾಗುವುದು. ನಂತರದಲ್ಲಿ ವಿಳಾಸ ಬದಲಾವಣೆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಪರಿಗಣಿಸಲಾಗುವುದಿಲ್ಲ

4) ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಆನ್ ಲೈನ್ ಮುಖಾಂತರ ವೆಬ್ ಸೈಟ್ ನಲ್ಲಿ ಲಭ್ಯವಿರುವ ಸೂಚನೆಗಳನ್ನು ಪಾಲಿಸಬೇಕು.

5) ಅಭ್ಯರ್ಥಿಗಳ ಅರ್ಹತೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.

6) ಅಭ್ಯರ್ಥಿಯ ಹೆಸರು ಅಂತಿಮ ಆಯ್ಕೆ ಪಟ್ಟಿಯಲ್ಲಿ ಬಂದಿದೆ ಎಂಬುದರ ಆಧಾರದ ಮೇಲೆ ಅಭ್ಯರ್ಥಿಗೆ ನೇಮಕಾತಿಯ ಯಾವುದೇ ಹಕ್ಕು ದೊರೆಯುವುದಿಲ್ಲ

7) ಸೇವೆಯಲ್ಲಿ ಇರುವ ತಮ್ಮ ಇಲಾಖೆಯ ಮುಖ್ಯಸ್ಥರ ನೀರಾಕ್ಷೇಪಣಾ ಪತ್ರವನ್ನು ಹೊಂದಿರತಕ್ಕದ್ದು.

8) ಅಂಗವಿಕಲ ಮೀಸಲಾತಿ ಪಡೆಯಲಿಚ್ಚಿಸುವ ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ ಸಿ.ಅ.ಸು.ಇ/115/ನೇಸನಿ /2005 ದಿನಾಂಕ 19–11–2005 ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಭಂದ ಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಪ್ರಮಾಣ ಪತ್ರವನ್ನು ಹೊಂದಿರತಕ್ಕದ್ದು.

9) ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ದಿನಾಂಕ 13–02–2001 ರ ಸರ್ಕಾರದ ಆದೇಶ ಸಂಖ್ಯೆ ಸಿ.ಅ.ಸು.ಇ–8/ಸೇನನಿ/2001 ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಶಾಲೆಯ ಮುಖೋಪಾಧ್ಯಾಯರ ಸಹಿ ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೇಲು ರುಜುವನ್ನು ಪಡೆದ ಪ್ರಮಾಣ ಪತ್ರಗಳನ್ನು ಹೊಂದಿರತಕ್ಕದ್ದು.

10) ಪ್ರಕಟಿಸಿರುವ ಹುದ್ದೆಗಳನ್ನು ಹೆಚ್ಚು ಮಾಡುವ ಅಥವಾ ಕಡಿಮೆ ಮಾಡುವ ಹಕ್ಕು ನೇಮಕಾತಿ ಪ್ರಾಧಿಕಾರಕ್ಕೆ ದತ್ತವಾಗಿರುತ್ತದೆ.

11) ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ದಿನಾಂಕವು ಸಾರ್ವಜನಿಕ ರಜಾ ದಿನವಾಗಿ ಘೋಷಿಸಲ್ಪಟರೆ ಆ ದಿನಾಂಕದ ಮಾರನೆ ದಿನವನ್ನು ಅರ್ಜಿ ಸ್ವೀಕರಿಸಲು ಕೊನೆ ದಿನಾಂಕವಾಗಿರುತ್ತದೆ.

12) ಅರ್ಜಿಯನ್ನು ON LINE ಮೂಲಕ ಸಲ್ಲಿಸತಕ್ಕದ್ದು. ಆಲ್ ಲೈನ್ ವಿಳಾಸ http://bellary-va.kar.nic.in ( Click on Recruitment ) ಆನ್ ಲೈನ್ ಅರ್ಜಿ ದಿನಾಂಕ 02–05–2011 ರಿಂದ ಲಭ್ಯವಿರುತ್ತದೆ. ಹಾಗೂ ದಿನಾಂಕ 07–06–2011 ಸಂಜೆ 5.30 ರವರೆಗೆ ಮಾತ್ರ ಲಭ್ಯವಿರುತ್ತದೆ. ON LINE ಹೊರತು ಪಡಿಸಿ ಇತರೆ ಯಾವುದೇ ವಿಧದಲ್ಲಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲು ಅಗುವುದಿಲ್ಲ.

13) ನಿಗದಿತ ವಿದ್ಯಾರ್ಹತೆಯಲ್ಲಿ ಗಳಿಸಿದ ಅಂಕಗಳ ಮೆರಿಟ್ ಆಧಾರದಲ್ಲಿ ಮೀಸಲಾತಿಗನುಗುಣವಾಗಿ ಪರಿಶೀಲನಾ ಪಟ್ಟಿಯನ್ನು ವೆಬ್ ಸೈಟ್‌ನಲ್ಲಿ ಪ್ರಕಟಿಸಲಾಗುವುದು. ಪರಿಶೀಲನಾ ಪಟ್ಟಿಯಲ್ಲಿನ ಅಭ್ಯರ್ಥಿಗಳು ನಿಗದಿತ ದಿನಾಂಕದಂದು (28–07–2011) ಮೂಲ ದಾಖಲೆಗಳ ಪರಿಶೀಲನೆಗಾಗಿ ಹಾಜರಾಗಬೇಕಾಗಿರುತ್ತದೆ.

14) ನಿಗದಿತ ದಿನಾಂಕದಂದು ದಾಖಲಾತಿಗಳ ಪರಿಶೀಲನೆಗೆ ಹಾಜರಾಗದೇ ಇರುವ ಅಭ್ಯರ್ಥಿಗಳು ಅನರ್ಹಗೊಳ್ಳುತ್ತಾರೆ. ಮತ್ತು ಪರಿಶೀಲನಾ ಪಟ್ಟಿಯ ಅಭ್ಯರ್ಥಿಗಳಿಗೆ ಯಾವುದೇ ಪ್ರತ್ಯೇಕ ಸೂಚನಾ ಪತ್ರವನ್ನು ಈ ಕಾರ್ಯಾಲಯದಿಂದ ಕಳುಹಿಸಲಾಗುವುದಿಲ್ಲ.

15) ಅರ್ಜಿಯಲ್ಲಿ ಕೇಳಿರುವ ಪೂರ್ಣ ಮಾಹಿತಿಯನ್ನು ಭರ್ತಿ ಮಾಡಿಲ್ಲದೇ ಇರುವ ಅಭ್ಯರ್ಥಿಗಳ ಅರ್ಜಿಗಳನ್ನು ಯಾವುದೇ ಮುನ್ಸೂಚನೆ ನೀಡದೇ ತಿರಸ್ಕರಿಸಲಾಗುವುದು.

16) ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಪ್ರಥಮ ಭಾಷೆಯಲ್ಲಿ ಮತ್ತು ಎರಡನೆ ಬಾಷೆಯಲ್ಲಿ ಕನ್ನಡ ಹೊಂದಿರದ ಅಭ್ಯರ್ಥಿಗಳಿಗೆ ಈ ಕಛೇರಿಯಿಂದ ನಿಗದಿಪಡಿಸುವ ಕನ್ನಡ ಭಾಷೆಯ ಪರೀಕ್ಷೆಯಲ್ಲಿ ಕಡ್ಡಾಯವಾಗಿ ಉತ್ತೀರ್ಣರಾಗಬೇಕಾಗುತ್ತದೆ.

ಅಮ್ಲನ್ ಆದಿತ್ಯ ಬಿಸ್ವಾಸ್

ಪಿ.ಆರ್.280 ಅಧ್ಯಕ್ಷರು

ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರ

ಮತ್ತು ಜಿಲ್ಲಾಧಿಕಾರಿ, ಬಳ್ಳಾರಿ ಜಿಲ್ಲೆ, ಬಳ್ಳಾರಿ.

**ಕರ್ನಾಟಕ ಸರ್ಕಾರ**

**ಇಲಾಖಾ ನೇಮಕಾತಿ ಸಮಿತಿಗಳ ಜಾಹೀರಾತುಗಳು**

**ಅದ್ಯಕ್ಷರು, ಇಲಾಖಾ ನೇಮಕಾತಿ ಸಮಿತಿ, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಫೀಲ್ಡ ಮಾರ್ಷಲ್ ಕೆ ಎಂ ಕಾರ್ಯಪ್ಪ ಭವನ, ನಂ–58, ಫೀಲ್ಡ ಮಾರ್ಷಲ್ ಕೆ ಎಂ ಕಾರ್ಯಪ್ಪ ರಸ್ತೆ ಬೆಂಗಳೂರು–560 025.**

**'ಸಿ' ವರ್ಗದ ಹುದ್ದೆಗೆ ನೇಮಕಾತಿ ಬಗ್ಗೆ ಪ್ರಕಟಣೆ**

**ಅಧಿಸೂಚನೆ ಸಂಖ್ಯೆ : ಸೈಕಪುಇ/ಸಿಬ್ಬಂದಿ/132/ಸಿನೇ/2011, ದಿನಾಂಕ : 18ನೇ ಆಗಸ್ಟ 2011**

**ಉಲ್ಲೇಖ :** ಸರ್ಕಾರಿ ಆದೇಶ ಸಂಖ್ಯೆ ಒಇ 124 ಕಸ್ಸೇ 2010 ದಿನಾಂಕ 28–07–2011.

ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಾನುಸಾರ ಈ ಕೆಳಗಿನ ಹುದ್ದೆಗಳ ನೇಮಕಾತಿಗಾಗಿ ಅರ್ಹತೆಯುಳ್ಳ ಮಾಜಿ ಸೈನಿಕ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿವಸಗಳೊಳಗಾಗಿ ಸರ್ಕಾರದಿಂದ ನಿಗದಿ ಪಡಿಸಿದ ಅರ್ಜಿ ನಮೂನೆ–1 ನ್ನು ದ್ವಿಪ್ರತಿಯಲ್ಲಿ ಸಲ್ಲಿಸಬೇಕು.

**ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ :–**

ಅಧ್ಯಕ್ಷರು,
ಇಲಾಖಾ ನೇಮಕಾತಿ ಸಮಿತಿ,
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ,
ಫೀಲ್ಡ್ ಮಾರ್ಷಲ್ ಕೆ ಎಂ ಕಾರ್ಯಪ್ಪ ಭವನ,
ನಂ–58, ಫೀಲ್ಡ್ ಮಾರ್ಷಲ್ ಕೆ ಎಂ ಕಾರ್ಯಪ್ಪ ರಸ್ತೆ
ಬೆಂಗಳೂರು – 560 025.

**ವೇತನ ಶ್ರೇಣಿ :–**

| ಕ್ರ ಸಂ | ಹುದ್ದೆ | ವೇತನ ಶ್ರೇಣಿ |
|---|---|---|
| 1 | ಪ್ರಥಮ ದರ್ಜೆ ಸಹಾಯಕರು | ರೂ. 7275–175–7800–200–8600–225–9500–250 –10500–300–12300–350–13350 |
| 2 | ಕಲ್ಯಾಣ ಸಂಘಟಿಕರು | ರೂ. 5800–100–6000–125–6500–150–7100–175–7800 –200–8600–225–9500–250–10500 |
| 3 | ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ | ರೂ. 5800–100–6000–125–6500–150–7100–175–7800 –200–8600–225–9500–250–10500 |
| 4 | ವಾಹನ ಚಾಲಕರು | ರೂ. 5800–100–6000–125–6500–150–7100–175–7800 –200–8600–225–9500–250–10500 |

**ಹುದ್ದೆಗಳ ವರ್ಗೀಕರಣ :–**

| ಹುದ್ದೆಗಳು | ಪ.ಜಾತಿ–1 (ಬ್ಯಾಕ್ ಲಾಗ್) | ಪ.ಪಂ | ಪ್ರವರ್ಗ | 2 ಎ | 2 ಬಿ | 3 ಎ | 3 ಬಿ | ಸಾಮಾನ್ಯ | ಅಂಗ ವಿಕಲರು | ಒಟ್ಟು ಹುದ್ದೆಗಳು |
|---|---|---|---|---|---|---|---|---|---|---|
| **ಪ್ರಥಮ ದರ್ಜೆ ಸಹಾಯಕರು** | **1** | – | – | **1** | **1** | **1** | – | – | – | **4** |
| **ಕಲ್ಯಾಣ ಸಂಘಟಿಕರು** | – | **1** | – | – | – | – | – | **1** | – | **2** |
| **ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ** | – | – | **1** | – | – | – | – | – | – | **1** |
| **ವಾಹನ ಚಾಲಕರು** | – | – | – | – | – | – | – | **1** | – | **1** |

**ಸಾಮಾನ್ಯ ಅರ್ಹತೆಗಳು :–**

(1) ಎಲ್ಲಾ ಹುದ್ದೆಗಳು ಮಾಜಿ ಸೈನಿಕರಿಗೆ ಮೀಸಲಾಗಿರುತ್ತವೆ.

(2) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕನ್ನಡ ಭಾಷೆಯನ್ನು ಒಂದು ವಿಷಯವನ್ನಾಗಿ ತೆಗೆದುಕೊಂಡು ತೇರ್ಗಡೆಯಾಗಿರಬೇಕು.

**ವಯೋಮಿತಿ :–**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ಮತ್ತು ಆಗಾಗ ನೀಡಲಾದ ತಿದ್ದುಪಡಿಗಳನ್ವಯ ಗರಿಷ್ಠ ವಯೋಮಿತಿಗೆ ಸಶಸ್ತ್ರ ಪಡೆಗಳಲ್ಲಿ ಸಲ್ಲಿಸಿದ ಸೇವಾವಧಿಗೆ ಮೂರು ವರ್ಷಗಳು ಸೇರಿದಂತೆ 01–06–2011 ಗೆ 52 ವರ್ಷ ಮೀರಿರಬಾರದು.

**ಪ್ರಥಮ ದರ್ಜೆ ಸಹಾಯಕರು:**

ಸೇನಾಪಡೆಗಳಿಂದ ಬಿಡುಗಡೆಯಾದ ಮಾಜಿ ಸೈನಿಕರು ಸೇನೆಯಲ್ಲಿ ಕನಿಷ್ಟ 10 ವರ್ಷ ಸೇವೆ ಸಲ್ಲಿಸಿ ಬಿಡುಗಡೆ ಹೊಂದಿರಬೇಕು ಹಾಗೂ ಮಾಜಿ ಸೈನಿಕರ ಪರಭಾಷೆಯಲ್ಲಿ ಒಳಪಟ್ಟಿರಬೇಕು.

**ಕಲ್ಯಾಣ ಸಂಘಟಿಕರು:**

(ಅ) ಆರ್ಮಿ ಫಸ್ಟ್ ಕ್ಲಾಸ್ / ವಾಯು ಸೇನೆ ಮತ್ತು ನೌಕಾದಳದಲ್ಲಿ ತತ್ಸಮಾನ ಪರೀಕ್ಷೆ / ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

(ಆ)ಸಶಸ್ತ್ರ ಪಡೆಯಲ್ಲಿ ಜ್ಯೂನಿಯರ್ ಕಮೀಷನ್ಡ ಅಧಿಕಾರಿಯಾಗಿ ಅದಕ್ಕೆ ಸಮನಾದ ವಾಯುದಳ / ನೌಕಾದಳದಲ್ಲಿ ಸೇವೆ ಸಲ್ಲಿಸಿ, ಪಿಂಚಣಿ ಪಡೆಯುತ್ತಿರಬೇಕು.

**ಅಧೀಕ್ಷಕರು, ಮಿಲಿಟರಿ ಬಾಲಕರ ವಸತಿ ನಿಲಯ :**

(ಇ)ಆರ್ಮಿ ಫಸ್ಟ್ ಕ್ಲಾಸ್ / ವಾಯು ಸೇನೆ ಮತ್ತು ನೌಕಾದಳದಲ್ಲಿ ತತ್ಸಮಾನ ಪರೀಕ್ಷೆ / ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

(ಈ)ಸಶಸ್ತ್ರ ಪಡೆಯಲ್ಲಿ ಜ್ಯೂನಿಯರ್ ಕಮೀಷನ್ಡ ಅಧಿಕಾರಿಯಾಗಿ ಅದಕ್ಕೆ ಸಮನಾದ ವಾಯುದಳ / ನೌಕಾದಳದಲ್ಲಿ ಸೇವೆ ಸಲ್ಲಿಸಿ, ಪಿಂಚಣಿ ಪಡೆಯುತ್ತಿರಬೇಕು.

**ವಾಹನ ಚಾಲಕರು:**

(ಉ)ಕನ್ನಡ ಒದಲು ಬರೆಯಲು ಬರಬೇಕು.

(ಊ)ಮಾನ್ಯ ವಾಹನ ಚಾಲನಾ ಪರವಾನಗಿ (ಭಾರಿ ಮತ್ತು ಲಘು ವಾಹನ)

**ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು :**

(1) ಸಶಸ್ತ್ರ ಪಡೆಯಿಂದ ಬಿಡುಗಡೆ ಹೊಂದಿದ ಪ್ರಮಾಣ ಪತ್ರ (Discharge Certificate) ಪೂರ್ಣ ದೃಡೀಕರಿಸಿದ ಎರಡು ಪ್ರತಿಗಳು.

(2) ಮೀಸಲಾತಿಗೆ ಸಂಬಂದಿಸಿದಂತೆ ತಹಸೀಲ್ದಾರರಿಂದ ಪಡೆದ ಇತ್ತೀಚಿನ ಪ್ರಮಾಣ ಪತ್ರ.

(3) ಎಸ್ ಎಸ್ ಎಲ್ ಸಿ ಅಥವಾ ತತ್ಸಮಾನ ಪರೀಕ್ಷೆ ಪ್ರಮಾಣ ಪತ್ರ ಮತ್ತು ಅಂಕ ಪಟ್ಟಿಗಳ 2 ನೆರಳಚ್ಚು ಪ್ರತಿಗಳು.

(4) ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ಇತ್ತೀಚಿನ ಚಾರಿತ್ರ್ಯ (Character Certificate) ಪ್ರಮಾಣ ಪತ್ರಗಳು.

**ಟಿಪ್ಪಣಿ :**

1. ಸರ್ಕಾರದಿಂದ ನಿಗದಿತ ಅರ್ಜಿ ನಮೂನೆ–1 ಪುಸ್ತಕ ಮಳಿಗೆಯಲ್ಲಿ ದೊರೆಯುತ್ತವೆ, ಒಂದು ವೇಳೆ ಅರ್ಜಿಗಳು ಲಭ್ಯವಿಲ್ಲದೇ ಇದ್ದಲ್ಲಿ ನಿಗದಿತ ನಮೂನೆಯಲ್ಲಿ ಬೆರಳಚ್ಚು ಮೂಲಕ ಅಥವಾ ಸ್ಪಷ್ಟ ಬರವಣಿಗೆಯಲ್ಲಿ ತಯಾರಿಸಿ ಸಲ್ಲಿಸಬಹುದಾಗಿದೆ.
2. ಹುದ್ದೆಗಳ ಸಂಖ್ಯೆ ಬದಲಾವಣೆಗೆ ಒಳಪಟ್ಟಿರುತ್ತವೆ.
3. ಸರ್ಕಾರಿ ಆದೇಶದನ್ವಯ ವರ್ಗೀಕರಣ, ಬದಲಾವಣೆ ಮಾಡುವ ಅಧಿಕಾರವನ್ನು ನೇಮಕಾತಿ ಸಮಿತಿಯು ಕಾಯ್ದಿರಿಸಿ ಕೊಂಡಿರುತ್ತದೆ.
4. ಅರ್ಜಿ ಭರ್ತಿ ಮಾಡುವಾಗ ಅಭ್ಯರ್ಥಿಗಳು ನೀಡುವ ವಿವರಗಳು ತಪ್ಪಿರಬಾರದು ಮತ್ತು ಮುಚ್ಚಿಡಬಾರದು. ಅರ್ಜಿ ಜೊತೆಗೆ ಲಗತ್ತಿಸಲಾದ ದಾಖಲೆಗಳಲ್ಲಿ ನೀಡಲಾದ ವಿವರಗಳನ್ನು ತಿದ್ದಬಾರದು ಅಥವಾ ಬದಲಾಯಿಸಬಾರದು.
5. ಹುದ್ದೆಗಳು ಕರ್ನಾಟಕ ರಾಜ್ಯದ ಸೀಮಿತಿಗೊಳಪಟ್ಟಿರುತ್ತವೆ.
6. ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕವಿರುವುದಿಲ್ಲ.
7. ಅಭ್ಯರ್ಥಿಗಳನ್ನು ಲಿಖಿತ ಪರೀಕ್ಷೆ ಹಾಗೂ ಸಂದರ್ಶನಕ್ಕೆ ಆಹ್ವಾನಿಸಿದಲ್ಲಿ ಯಾವುದೇ ಭತ್ಯೆ ನೀಡಲಾಗುವುದಿಲ್ಲ.
8. ಆಯ್ಕೆಯಾದ ಅಭ್ಯರ್ಥಿಯು ಕರ್ನಾಟಕ ರಾಜ್ಯದ ಯಾವುದೇ ಭಾಗದಲ್ಲಿ ಸೇವೆ ಸಲ್ಲಿಸಲು ಬದ್ಧನಾಗಿರಬೇಕು.
9. ಅಪೂರ್ಣವಾದ, ಲಗತ್ತುಗಳಿಲ್ಲದ ಅರ್ಜಿಗಳನ್ನು ಮತ್ತು ಸಮಯ ಮೀರಿ ಬಂದ ಅರ್ಜಿಗಳನ್ನು ಯಾವುದೇ ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.

ಅಧ್ಯಕ್ಷರು,
ಇಲಾಖಾ ನೇಮಕಾತಿ ಸಮಿತಿ ಮತ್ತು ನಿರ್ದೇಶಕರು
ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ
ಬೆಂಗಳೂರು.

ಪಿ.ಆರ್.279

**IN THE COURT OF THE IV ADDL. CITY CIVIL JUDGE, MAYOHALL, BANGALORE: CCH-21**

**P & S.C. NO.25034/2011 HG:15.09.2011**

**PETITIONERS:**

1) Smt. Sankari Ananth W/o Mr. G. Ananth aged 52 yrs, R/at No.300, 4th Main, Domlur II Stage III Phase, Bangalore-560071.
2) Smt. M. Mangala Gowri, W/o Mr. Manohar, R/at No.2, 7th Cross, Elangonagar, Pondicherry.
3) Mr. V. Hemprakash, S/o Vijaya Bhaskar, aged 44 yrs R/at No.300, 4th Main, Domlur II Stage, III Phase, Bangalore-560071.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 372 of the Indian Succession Act, for grant of Succession Certificate to the estate of the deceased Sri Vijaya Bhaskar and Smt. Jayalakshmi Who died on 03.03.2002 and 10.04.2009 at Bangalore.

Be it known that No caveat has been entered and the said petition is posted for hearing on 15.09.2011 at 11'O clock. Any person's claiming to have any interest may come and participate in the proceedings before grant of Succession Certificate.

**SCHEDULE**

All the annual Royalty amount payable to late Vijayabhaskar from Indian Performing Right Society Limited., No.208, Golden Chambers, New Andheri Link Road, Andheri West, Mumbai-India infavour of the Petitioners 1/3 equal shares to petitioners 1 to 3 approximately amounting Rs.70,000/- annually.

Given under my hand and the seal of the Court, this the 4th day of August, 2011

By Order of the Court,

PD-105

Assistant Registrar,

City Civil Court Mayo Hall Unit, Bangalore.

**IN THE COURT OF THE IV ADDL. CITY CIVIL JUDGE, MAYOHALL, BANGALORE: CCH-21**

**P & S.C. NO.25038/2011 HG:15.09.2011**

**PETITIONERS:**

1) B.K. Prashanth, aged 44 years S/o Late B.A. Krishnaiah Setty.
2) B.K. Meera aged 47 years D/o Late B.A. Krishnaiah Setty.
Both R/at # 109, 6th Main Road, 2nd Cross III Phase J.P. Nagar, Bangalore-560078.

**V/s**

**RESPONDENT:** Nil

**PUBLIC NOTICE**

Notice is hereby given that a petition has been made to this Court Under Sec 276 of the Indian Succession Act, for grant of probate of the Will Dated:21.02.2010 executed by the deceased K. Nagaraj Who died on 15.05.2010.

Be it known that No caveat has been entered and the said petition is posted for hearing on 15.09.2011 at 11'O clock. Any person's claiming to have any interest may come and participate in the proceedings before grant of probate.

**SCHEDULE**

All the piece and parcel of the House property situated at No.109, 2nd Cross, 2nd Main, 3rd Phase, J.P. Nagar, Bangalore-560078, measuring

East by: Property bearing No.110

West by: Property bearing No.108

North by: Road

South by: Property bearing No.111 & 112

Given under my hand and the seal of the Court, this the 10th day of August, 2011

By Order of the Court,

PD-107

Assistant Registrar,

City Civil Court Mayo Hall Unit, Bangalore.

**ಕರ್ನಾಟಕ ಲೋಕಸೇವಾ ಆಯೋಗ**

**ಲೋಕಸೇವಾ ಆಯೋಗದ ಕಛೇರಿ, ಉದ್ಯೋಗ ಸೌಧ, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಇಪ(2)308/2011-12/ಪಿಎಸ್‌ಸಿ, ಬೆಂಗಳೂರು, ದಿನಾಂಕ:19.08.2011**

2010ನೇ ಸಾಲಿನ ದ್ವಿತೀಯ ಅಧಿವೇಶನದ ಇಲಾಖಾ ಪರೀಕ್ಷೆಗಳ ಫಲಿತಾಂಶವನ್ನು ದಿನಾಂಕ:14.04.2011ರ ರಾಜ್ಯಪತ್ರದಲ್ಲಿ ಆಯೋಗದ ಅಧಿಸೂಚನೆ ಸಂಖ್ಯೆ: ಇಪ(1)2979/2010–11/ಪಿಎಸ್‌ಸಿ, ದಿನಾಂಕ:22.03.2011ರಡಿ ಪ್ರಕಟಿಸಲಾಗಿದ್ದು, ಸದರಿ ಅಧಿವೇಶನದಲ್ಲಿ ಅಭ್ಯರ್ಥಿಯು ಗಳಿಸಿರುವ ಅಂಕಗಳು ಹಾಗೂ ಹಿಂದಿನ ಅಧಿವೇಶನದಲ್ಲಿ ಪಡೆದಿರುವ ವಿನಾಯಿತಿಗಳನ್ನು ಮತ್ತು ಬಿ.ಕಾಂ, ಪದವಿಯ ಆಧಾರದ ಮೇಲೆ ವಿನಾಯಿತಿ ನೀಡಿ ಫಲಿತಾಂಶ ಪ್ರಕಟಿಸುವಂತೆ ಅಭ್ಯರ್ಥಿಯಿಂದ ಬಂದ ಮನವಿಯನ್ನು ಪರಿಶೀಲಿಸಿ ಸದರಿ ಅಭ್ಯರ್ಥಿಯ ಫಲಿತಾಂಶವನ್ನು ಈ ತಿದ್ದುಪಡಿಯ ಮೂಲಕ ಸಂಬಂಧಿತರ ಮಾಹಿತಿಗಾಗಿ ಪ್ರಕಟಿಸಲಾಗಿದೆ.

**ಅಪೆಂಡಿಕ್ಸ್ "ಬಿ"**

**ಬೆಂಗಳೂರು ಕೇಂದ್ರ**

**ಎಸ್.ಎ.ಎಸ್. ಭಾಗ–III**

ಎಸ್.ಎ.ಎಸ್. ಭಾಗ– III ರ ಪತ್ರಿಕೆ–2 ರಿಂದ 5ರವರೆಗೆ ಉತ್ತೀರ್ಣರಾದವರಡಿ ನೋಂದಣಿ ಸಂಖ್ಯೆ: 60202ನ್ನು ಸೇರಿಸಿ ಓದಿಕೊಳ್ಳುವುದು.

**ವಿ.ಬಿ. ಪಾಟೀಲ್**

ಕಾರ್ಯದರ್ಶಿ

ಪಿ.ಆರ್.281

ಹಾಗೂ ಇಲಾಖಾ ಪರೀಕ್ಷೆಗಳ ನಿಯಂತ್ರಕರು,

ಕರ್ನಾಟಕ ಲೋಕಸೇವಾ ಆಯೋಗ. ಬೆಂಗಳೂರು